# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 238
ಸದಸ್ಯರ ಹೆಸರು : ಶ್ರೀ ಯು.ಬಿ.ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 10.12.2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ನೌಕರರು ತಮ್ಮ ಸೇವಾವಧಿಯಲ್ಲಿ ಭ್ರಷ್ಟಾಚಾರದ ಆರೋಪದ ಮೇಲೆ ಅಮಾನತ್ತುಗೊಂಡ ಸಂದರ್ಭದಲ್ಲಿ, ಅವರ ಮೇಲಿನ ಆರೋಪಗಳ ಬಗ್ಗೆ ಲೋಕಾಯುಕ್ತ, ಎ.ಸಿ.ಬಿ. ಹಾಗೂ ಇಲಾಖಾ ವಿಚಾರಣಾ ಸಮಿತಿಗಳು ನಿಗದಿತ ಕಾಲಾವಧಿಯೊಳಗೆ ಪ್ರಕರಣಗಳನ್ನು ಮುಕ್ತಾಯಗೊಳಿಸಲು ಕ್ರಮ ಕೈಗೊಳ್ಳುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; | ಬಂದಿದೆ.<br><br>ಕೇಂದ್ರದ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ, 1988ರಡಿ ಭ್ರಷ್ಟಾಚಾರ ನಿಗ್ರಹ ದಳ(ಎಸಿಬಿ) ದಿಂದ ಸರ್ಕಾರಿ ನೌಕರರ ವಿರುದ್ಧ ಕ್ರಿಮಿನಲ್ ಪ್ರಕರಣಗಳನ್ನು ಜರುಗಿಸಲಾಗುತ್ತಿದೆ. ಇಂತಹ ಕ್ರಿಮಿನಲ್ ಪ್ರಕರಣಗಳನ್ನು ಇತ್ಯರ್ಥಪಡಿಸಲು ಕಾಲಮಿತಿ ನಿಗದಿಪಡಿಸಲಾಗಿರುವುದಿಲ್ಲ.<br><br>ಎಸಿಬಿ ಅಸ್ತಿತ್ವಕ್ಕೆ ಬರುವ ಪೂರ್ವದಲ್ಲಿ ಇಂತಹ ಪ್ರಕರಣಗಳನ್ನು ಲೋಕಾಯುಕ್ತದಿಂದ ಇಲಾಖಾ ವಿಚಾರಣೆಗೆ ಕೂಡ ವಹಿಸಲಾಗಿರುತ್ತದೆ. |
| ಆ) ನೂರಾರು ಪ್ರಕರಣಗಳಲ್ಲಿ ನಿವೃತ್ತಿ ನಂತರವೂ ವಿಚಾರಣೆ ಮುಕ್ತಾಯಗೊಳ್ಳದಿರುವುದರಿಂದ, ನೌಕರರ ನಿವೃತ್ತಿ ನಂತರದ ಉಪಲಬ್ಧಗಳು ಲಭ್ಯವಾಗದಿರುವುದರಿಂದ ಆ ಕುಟುಂಬಗಳು ತೊಂದರೆಯಲ್ಲಿರುವುದನ್ನು ಸರ್ಕಾರ ಮನಗಂಡಿದೆಯೇ; | ಸರ್ಕಾರಿ ನೌಕರರ ವಿರುದ್ಧದ ಯಾವುದೇ ಇಲಾಖಾ ವಿಚಾರಣೆಯನ್ನು ಗರಿಷ್ಠ 9 ತಿಂಗಳ ಒಳಗಾಗಿ ಇತ್ಯರ್ಥಪಡಿಸುವಂತೆ ಸರ್ಕಾರದಿಂದ ದಿನಾಂಕ 28.06.2001ರ ಅಧಿಕೃತ ಜ್ಞಾಪನದಲ್ಲಿ ಎಲ್ಲಾ ಇಲಾಖೆಗಳಿಗೆ ಸೂಚನೆಗಳನ್ನು ನೀಡಲಾಗಿದೆ. ಈ ವಿಷಯದಲ್ಲಿ ಕಾಲಕಾಲಕ್ಕೆ ಎಲ್ಲಾ ಇಲಾಖೆಗಳಿಗೆ ಮರು ಸೂಚನೆಗಳನ್ನು ಕೂಡ ನೀಡಲಾಗಿದೆ.<br><br>ಮುಂದುವರೆದು, ಸರ್ಕಾರದ ಹಂತದಲ್ಲಿ ಉನ್ನತ ಮಟ್ಟದಲ್ಲಿ ಬಾಕಿ ಇರುವ ಇಲಾಖಾ ವಿಚಾರಣೆಗಳ ಪ್ರಗತಿ ಪರಿಶೀಲನೆಯನ್ನು ಕಾಲಕಾಲಕ್ಕೆ ನಡೆಸಲಾಗುತ್ತಿದೆ ಹಾಗೂ ವಿಳಂಬವಾಗಿರುವ ಇಲಾಖಾ ವಿಚಾರಣೆಗಳನ್ನು ತ್ವರಿತವಾಗಿ ಇತ್ಯರ್ಥಗೊಳಿಸಲು ಸೂಚನೆಗಳನ್ನು ನೀಡಲಾಗುತ್ತಿದೆ. |
| ಇ) ಇಂತಹ ಪ್ರಕರಣಗಳ ವಿಚಾರಣೆಗಳನ್ನು ಕನಿಷ್ಠ 5 ವರ್ಷಗಳಲ್ಲಿ ಮುಕ್ತಾಯಗೊಳಿಸಬೇಕೆನ್ನುವ ಬಗ್ಗೆ ಸರ್ಕಾರ ವಿಧೇಯಕವನ್ನು ತರಲು ಚಿಂತಿಸುತ್ತದೆಯೇ? | ಅಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

ಬಿ.ಎಸ್.

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಸಂಖ್ಯೆ: ಸಿಆಸುಇ 55 ಸೇಇವಿ 2020